## 78. ಅನ್ನಬಅ್

ಸೂ. 40 ರು. 2

سُوْرَةُ النَّبَاِ مَكِّيَّةٌ — اٰيَاتُهَا ٤٠ — رُكُوْعَاتُهَا ٢

(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. *ಇವರು ಯಾವ ವಿಷಯದ ಕುರಿತು ವಿಚಾರಿಸುತ್ತಿದ್ದಾರೆ?

عَمَّ يَتَسَآءَلُوْنَ ۚ ﴿١﴾

2. ಆ ಮಹಾ ವಾರ್ತೆಯ ಕುರಿತು-

عَنِ النَّبَاِ الْعَظِيْمِ ۙ ﴿٢﴾

3. ಇವರು ನಾನಾ ವಿಧದ ಪಿಸು ಮಾತುಗಳನ್ನಾಡುತ್ತಿರುವುದೇ?

الَّذِىْ هُمْ فِيْهِ مُخْتَلِفُوْنَ ؕ ﴿٣﴾

4. ಖಂಡಿತ ಅಲ್ಲ![1] ಸದ್ಯದಲ್ಲೇ ಅವರಿಗೆ ತಿಳಿದು ಬರುವುದು-

كَلَّا سَيَعْلَمُوْنَ ۙ ﴿٤﴾

5. ಹೌದು ಖಂಡಿತ ಅಲ್ಲ! ಸದ್ಯದಲ್ಲೇ ಅವರಿಗೆ ತಿಳಿದು ಬರುವುದು.

ثُمَّ كَلَّا سَيَعْلَمُوْنَ ﴿٥﴾

6. ಇವು ವಾಸ್ತವಿಕತೆಯಲ್ಲವೆ, ನಾವು ಭೂಮಿಯನ್ನು ಹಾಸನ್ನಾಗಿ ಮಾಡಿರುವುದು-

اَلَمْ نَجْعَلِ الْاَرْضَ مِهٰدًا ۙ ﴿٦﴾

7. ಪರ್ವತಗಳನ್ನು ಮೊಳೆಗಳಂತೆ ನಾಟಿ ಬಿಟ್ಟಿರುವುದು.

وَّالْجِبَالَ اَوْتَادًا ۙ ﴿٧﴾

8. ನಿಮ್ಮನ್ನು (ಸ್ತ್ರೀ ಮತ್ತು ಪುರುಷರ) ಜೋಡಿಗಳ ರೂಪದಲ್ಲಿ ಸೃಷ್ಟಿಸಿರುವುದು-

وَّخَلَقْنٰكُمْ اَزْوَاجًا ۙ ﴿٨﴾

9. ನಿಮ್ಮ ನಿದ್ರೆಯನ್ನು ವಿಶ್ರಾಂತಿಯ ಸಾಧನವಾಗಿ ಮಾಡಿರುವುದು-

وَّجَعَلْنَا نَوْمَكُمْ سُبَاتًا ۙ ﴿٩﴾

10. ರಾತ್ರೆಯನ್ನು ಮರೆಮಾಡುವ ಸಾಧನವಾಗಿ ಮಾಡಿರುವುದು-

وَّجَعَلْنَا الَّيْلَ لِبَاسًا ۙ ﴿١٠﴾

11. ಹಗಲನ್ನು ಉಪಜೀವನವನ್ನರಸುವ ಸಮಯವಾಗಿಯೂ ಮಾಡಿರುವುದು-

وَّجَعَلْنَا النَّهَارَ مَعَاشًا ۙ ﴿١١﴾

---

***ಇಲ್ಲಿಂದ 30ನೆಯ ಕಾಂಡ ಆರಂಭ**

1. ಅರ್ಥಾತ್- ಪರಲೋಕದ ಬಗ್ಗೆ ಜನರು ಆಡಿಕೊಳ್ಳುತ್ತಿರುವ ಮಾತುಗಳೆಲ್ಲವೂ ತಪ್ಪು. ಅವರು ಕಲ್ಪಿಸಿಕೊಂಡಿರುವುದಾವುದೂ ಸರಿಯಲ್ಲ.

| | |
|---|---|
| 12. ನಿಮ್ಮ ಮೇಲ್ಭಾಗದಲ್ಲಿ ಬಲವಾದ ಸಪ್ತ ಗಗನಗಳನ್ನು ನೆಲೆ ಗೊಳಿಸಿರುವುದು- | وَّبَنَيْنَا فَوْقَكُمْ سَبْعًا شِدَادًا ۝١٢ |
| 13. ಒಂದು ಪ್ರಕಾಶಮಾನವಾದ ಬಿಸಿಯಾದ ದೀಪವನ್ನು ಸೃಷ್ಟಿಸಿ ರುವುದು-[2] | وَّجَعَلْنَا سِرَاجًا وَّهَّاجًا ۝١٣ |
| 14. ಮೋಡಗಳಿಂದ ಎಡೆಬಿಡದೆ ಮಳೆಯನ್ನು ಸುರಿಸುವುದು- | وَّاَنْزَلْنَا مِنَ الْمُعْصِرٰتِ مَآءً ثَجَّاجًا ۝١٤ |
| 15-16. ತನ್ಮೂಲಕ ಧಾನ್ಯಗಳನ್ನೂ ಹಸಿರು ತರಕಾರಿಗಳನ್ನೂ ದಟ್ಟವಾದ ತೋಟಗಳನ್ನೂ ಬೆಳೆಸಿರುವುದು. | لِّنُخْرِجَ بِهٖ حَبًّا وَّنَبَاتًا ۝١٥ وَّجَنّٰتٍ اَلْفَافًا ۝١٦ |
| 17. ನಿಸ್ಸಂದೇಹವಾಗಿಯೂ ತೀರ್ಮಾನದ ದಿನವು ಒಂದು ನಿಶ್ಚಿತ ಸಮಯವಾಗಿದೆ- | اِنَّ يَوْمَ الْفَصْلِ كَانَ مِيْقَاتًا ۝١٧ |
| 18. ಕಹಳೆಯನ್ನು ಊದುವಂದು ನೀವು ತಂಡೋಪತಂಡಗಳಾಗಿ ಹೊರಟು ಬರುವಿರಿ- | يَّوْمَ يُنْفَخُ فِى الصُّوْرِ فَتَاْتُوْنَ اَفْوَاجًا ۝١٨ |
| 19. ಆಕಾಶವನ್ನು ತೆರೆದು ಬಿಡಲಾಗುವುದು- ಅದು ದ್ವಾರಗಳೇ ದ್ವಾರಗಳಾಗಿ ಬಿಡುವುದು- | وَّفُتِحَتِ السَّمَآءُ فَكَانَتْ اَبْوَابًا ۝١٩ |
| 20. ಮತ್ತು ಪರ್ವತಗಳು ಚಲಿಸಲ್ಪಡುವುವು- ಅವು ಮರೀಚಿಕೆಗಳಾಗಿ ಬಿಡುವುವು. | وَّسُيِّرَتِ الْجِبَالُ فَكَانَتْ سَرَابًا ۝٢٠ |
| 21. ವಾಸ್ತವದಲ್ಲಿ, ನರಕವು ಒಂದು ಬೋನಾಗಿದೆ.[3] | اِنَّ جَهَنَّمَ كَانَتْ مِرْصَادًا ۝٢١ |
| 22. ಅದು ವಿದ್ರೋಹಿಗಳ ವಾಸಸ್ಥಾನವಾಗಿದೆ- | لِّلطّٰغِيْنَ مَاٰبًا ۝٢٢ |
| 23. ಅದರಲ್ಲಿ ಅವರು ದೀರ್ಘಕಾಲ ಬಿದ್ದು ಕೊಂಡಿರುವರು.[4] | لّٰبِثِيْنَ فِيْهَآ اَحْقَابًا ۝٢٣ |

2. ಅರ್ಥಾತ್- ಸೂರ್ಯ. ಮೂಲದಲ್ಲಿ 'ವಹ್ಹಾಜ್' ಎಂಬ ಪದ ಪ್ರಯೋಗವಾಗಿದೆ. ಅದರ ಅರ್ಥ ಅತ್ಯಂತ ಹೆಚ್ಚು ಉಷ್ಣಾಂಶ ಉಳ್ಳದ್ದು ಎಂದೂ ಆಗುತ್ತದೆ ಮತ್ತು ಅತ್ಯಂತ ಪ್ರಕಾಶಮಯ ಎಂದೂ ಆಗುತ್ತದೆ. ಆದ್ದರಿಂದಲೇ ಅನುವಾದದಲ್ಲಿ ನಾವು ಎರಡೂ ಪದಗಳನ್ನು ಸೇರಿಸಿದ್ದೇವೆ.

3. ಬೋನು- ಎಂದರೆ ಇಲ್ಲಿ ಬೇಟೆಯ ಪ್ರಾಣಿಗೆ- ಅದು ತಿಳಿಯದೆ ಬಂದು ಸಿಕ್ಕಿಹಾಕಿಕೊಳ್ಳಲು ಸಿದ್ಧಪಡಿಸಲಾದ ಸ್ಥಳ. ನರಕಕ್ಕೆ ಈ ಪದ ಪ್ರಯೋಗವಾಗಿದೆ. ಏಕೆಂದರೆ ದೇವಧಿಕ್ಕಾರಿಗಳು ಲೋಕದಲ್ಲಿ ಅವನ ಬಗ್ಗೆ ನಿರ್ಭೀತಿಯಿಂದ ಮೆರೆಯುತ್ತಾ ತಿರುಗಾಡುತ್ತಾರೆ. ಈ ವಿಶ್ವವು ತಮಗಾಗಿಯೇ ಇರುವ ಮುಕ್ತವಾದ ಆಡುಂಬೊಲವಾಗಿದೆ, ಇಲ್ಲಿ ಯಾರ ಹಿಡಿತದ ಭಯವೂ ಇಲ್ಲವೆಂದು ಅವರು ಭಾವಿಸುತ್ತಾರೆ. ಆದರೆ ನರಕವು ಅವರನ್ನು ಹೊಂಚು ಹಾಕಿ ಹಿಡಿಯುವ ಸ್ಥಳವಾಗಿದೆ. ಒಮ್ಮೆ ಅವರು ಅದರಲ್ಲಿ ಸಿಕ್ಕಿ ಹಾಕಿಕೊಂಡರೆ ಅನಂತರ ಸದಾ ಸಿಕ್ಕಿಹಾಕಿಕೊಂಡೇ ಇರುತ್ತಾರೆ.

4. ಮೂಲದಲ್ಲಿ 'ಅಹ್‌ಕಾಬ್' ಎಂಬ ಪದ ಪ್ರಯೋಗವಾಗಿದೆ. ಅದರ ಅರ್ಥ ಅನುಕ್ರಮವಾಗಿ ಬರುವ ಸುದೀರ್ಘ ಅವಧಿಗಳು ಅಥವಾ

| | |
|---|---|
| 24. ಅದರೊಳಗೆ ಅವರು ಯಾವುದೇ ತಂಪನ್ನಾಗಲಿ, ಕುಡಿಯಲರ್ಹ ವಾದ ಯಾವುದೇ ವಸ್ತುವಿನ ರುಚಿಯನ್ನಾಗಲಿ ಸವಿಯಲಾರರು- | لَا يَذُوقُونَ فِيهَا بَرْدًا وَّلَا شَرَابًا ﴿٢٤﴾ |
| 25. ಏನಾದರೂ ಸಿಗುವುದಿದ್ದರೆ ಅದು ಕುದಿಯುವ ನೀರು ಮತ್ತು ಹುಣ್ಣುಗಳ ಕೀವು ಮಾತ್ರ- | إِلَّا حَمِيمًا وَّغَسَّاقًا ﴿٢٥﴾ |
| 26. (ಅವರ ದುಷ್ಕೃತ್ಯಗಳ) ಪರಿಪೂರ್ಣ ಪ್ರತಿಫಲವಿದು. | جَزَاءً وِّفَاقًا ﴿٢٦﴾ |
| 27. ಅವರು ಯಾವುದೇ ವಿಚಾರಣೆಯನ್ನು ನಿರೀಕ್ಷಿಸುತ್ತಿರಲಿಲ್ಲ- | إِنَّهُمْ كَانُوا لَا يَرْجُونَ حِسَابًا ﴿٢٧﴾ |
| 28. ಮತ್ತು ಅವರು ನಮ್ಮ ಸೂಕ್ತಗಳನ್ನು ಸಂಪೂರ್ಣವಾಗಿ ಸುಳ್ಳಾಗಿಸಿ ಬಿಟ್ಟಿದ್ದರು. | وَّكَذَّبُوا بِآيَاتِنَا كِذَّابًا ﴿٢٨﴾ |
| 29. ವಸ್ತುತಃ ನಾವು ಪ್ರತಿಯೊಂದನ್ನೂ ಸರಿಯಾಗಿ ಎಣಿಸಿ ಬರೆದಿಟ್ಟಿದ್ದೆವು- | وَكُلَّ شَيْءٍ أَحْصَيْنَاهُ كِتَابًا ﴿٢٩﴾ |
| 30. ಈಗ ಇದರ ರುಚಿ ಸವಿಯಿರಿ. ನಾವು ನಿಮಗಾಗಿ ಯಾತನೆಯ ಹೊರತು ಬೇರೇನನ್ನೂ ಖಂಡಿತ ಹೆಚ್ಚಿಸಲಾರೆವು. | فَذُوقُوا فَلَن نَّزِيدَكُمْ إِلَّا عَذَابًا ﴿٣٠﴾ |
| 31. ಖಂಡಿತವಾಗಿಯೂ ಧರ್ಮನಿಷ್ಠರಿಗಾಗಿ ಯಶಸ್ಸಿನ ಒಂದು ಸ್ಥಾನವಿದೆ. | إِنَّ لِلْمُتَّقِينَ مَفَازًا ﴿٣١﴾ |
| 32. ಅವರಿಗಾಗಿ ಉದ್ಯಾನಗಳು ಮತ್ತು ದ್ರಾಕ್ಷಿಗಳಿವೆ- | حَدَائِقَ وَأَعْنَابًا ﴿٣٢﴾ |
| 33. ಸಮವಯಸ್ಕ ನವತರುಣಿಯರಿದ್ದಾರೆ- | وَّكَوَاعِبَ أَتْرَابًا ﴿٣٣﴾ |
| 34. ಮತ್ತು ತುಂಬಿ ತುಳುಕುವ ಪಾನಪಾತ್ರೆಗಳಿವೆ. | وَّكَأْسًا دِهَاقًا ﴿٣٤﴾ |
| 35. ಅಲ್ಲಿ ಅವರು ಯಾವುದೇ ಅಸಂಬದ್ಧ ಮತ್ತು ಸುಳ್ಳು ಮಾತನ್ನು ಕೇಳಲಾರರು. | لَا يَسْمَعُونَ فِيهَا لَغْوًا وَّلَا كِذَّابًا ﴿٣٥﴾ |
| 36. ನಿಮ್ಮ ಪ್ರಭುವಿನ ಕಡೆಯಿಂದ ಸತ್ಫಲ ಹಾಗೂ ಸಾಕಷ್ಟು ಪುರಸ್ಕಾರ,[5] | جَزَاءً مِّن رَّبِّكَ عَطَاءً حِسَابًا ﴿٣٦﴾ |

ಒಂದು ಯುಗ ಕಳೆಯುತ್ತಲೇ ಮತ್ತೊಂದು ಯುಗ ಆರಂಭವಾಗುವ ನಿರಂತರವಾದ ಯುಗಗಳು ಎಂದಾಗಿದೆ.

5. 'ಸತ್ಫಲದ ನಂತರ ಸಾಕಷ್ಟು ಪುರಸ್ಕಾರ'ದ ಪ್ರಸ್ತಾಪವನ್ನು ಇಲ್ಲಿ ಮಾಡಲಾಗಿರುವುದೇಕೆಂದರೆ ಅವರಿಗೆ, ತಮ್ಮ ಸತ್ಕರ್ಮಗಳಿಂದ ಅವರು ಯಾವ ಪ್ರತಿಫಲಕ್ಕೆ ಅರ್ಹರಾಗಿದ್ದಾರೋ ಅಷ್ಟು ಪ್ರತಿಫಲವನ್ನು ಮಾತ್ರ ನೀಡಲಾಗುವುದಿಲ್ಲ. ಬದಲಾಗಿ ಆ ಬಗ್ಗೆ ಅವರಿಗೆ ಮತ್ತಷ್ಟು ಪುರಸ್ಕಾರ ಮತ್ತು ಅನುಗ್ರಹಗಳನ್ನೂ ದಯಪಾಲಿಸಲಾಗುವುದು.

37. ಭೂಮಿ-ಆಕಾಶಗಳ ಮತ್ತು ಅವುಗಳ ನಡುವಿನ ಪ್ರತಿಯೊಂದು ವಸ್ತುವಿನ ಒಡೆಯನಾಗಿರುವ ಪರಮ ದಯಾಮಯನಾದ ಪ್ರಭುವಿನ ಕಡೆಯಿಂದ ಅವನ ಮುಂದೆ ಮಾತಾಡುವ ಸಾಮರ್ಥ್ಯ ಯಾರಿಗೂ ಇಲ್ಲ.[6]

رَّبِّ السَّمٰوٰتِ وَ الْاَرْضِ وَمَا بَيْنَهُمَا الرَّحْمٰنِ لَا يَمْلِكُوْنَ مِنْهُ خِطَابًا ﴿٣٧﴾

38. 'ರೂಹ್'[7] ಮತ್ತು ದೇವಚರರು ಸಾಲು ಸಾಲಾಗಿ ನಿಲ್ಲಲಿರುವ ಆ ದಿನ ಪರಮ ದಯಾಮಯನ ಅನುಮತಿ ಪಡೆದ ಮತ್ತು ಸರಿಯಾದ ಮಾತನ್ನೇ ಆಡುವ ವ್ಯಕ್ತಿಯ ಹೊರತು ಬೇರಾರೂ ಮಾತಾಡಲಾರರು.

يَوْمَ يَقُوْمُ الرُّوْحُ وَالْمَلٰٓئِكَةُ صَفًّا ۙۗ لَّا يَتَكَلَّمُوْنَ اِلَّا مَنْ اَذِنَ لَهُ الرَّحْمٰنُ وَقَالَ صَوَابًا ﴿٣٨﴾

39. ಆ ದಿನ ಬರುವುದು ಸತ್ಯ. ಇನ್ನು ಇಷ್ಟವಿದ್ದವರು ತಮ್ಮ ಪ್ರಭುವಿನ ಕಡೆಗೆ ಮರಳುವ ಹಾದಿ ಹಿಡಿದುಕೊಳ್ಳಲಿ.

ذٰلِكَ الْيَوْمُ الْحَقُّ ۚ فَمَنْ شَآءَ اتَّخَذَ اِلٰى رَبِّهٖ مَاٰبًا ﴿٣٩﴾

40. ಸನ್ನಿಹಿತವಾಗಿ ಬಿಟ್ಟಿರುವ ಆ ಯಾತನೆಯ ಬಗ್ಗೆ ನಿಮ್ಮನ್ನು ನಾವು ಎಚ್ಚರಿಸಿದ್ದೇವೆ. ಅಂದು ಮಾನವನು- ತನ್ನ ಕೈಗಳು ಮುಂದೆ ಕಳುಹಿಸಿರುವುದೆಲ್ಲವನ್ನೂ ಕಂಡುಕೊಳ್ಳುವನು ಮತ್ತು ಸತ್ಯ ನಿಷೇಧಿಯು "ಅಯ್ಯೋ ನಾನು ಮಣ್ಣಾಗಿ ಬಿಡುತ್ತಿದ್ದರೆ!" ಎಂದು ಗೋಳಿಡುವನು.

اِنَّآ اَنْذَرْنٰكُمْ عَذَابًا قَرِيْبًا ۚۖ يَّوْمَ يَنْظُرُ الْمَرْءُ مَا قَدَّمَتْ يَدٰهُ وَيَقُوْلُ الْكٰفِرُ يٰلَيْتَنِىْ كُنْتُ تُرٰبًا ﴿٤٠﴾

---

6. ಅರ್ಥಾತ್- ಹಶ್ರ್‌ನ ಮೈದಾನದಲ್ಲಿ ಅಲ್ಲಾಹನ ದರಬಾರಿನ ಗಾಂಭೀರ್ಯ ಹೇಗಿರುವುದೆಂದರೆ ಭೂಮಿಯವರಿಗಾಗಲಿ ಆಕಾಶದವರಿಗಾಗಲಿ ಅಲ್ಲಾಹನ ಮುಂದೆ ತುಟಿ ಬಿಚ್ಚುವ ಅಥವಾ ನ್ಯಾಯಾಲಯದ ಕೆಲಸಗಳಲ್ಲಿ ಹಸ್ತಕ್ಷೇಪ ನಡೆಸುವ ಧೈರ್ಯವಿರಲಾರದು.

7. 'ರೂಹ್' ಎಂದರೆ ಜಿಬ್‌ರೀಲ್(ಅ) ಆಗಿದ್ದಾರೆ. ಅಲ್ಲಾಹನ ಬಳಿ ಅವರಿಗಿರುವ ಉನ್ನತ ಸ್ಥಾನಮಾನದಿಂದಾಗಿ ಅವರನ್ನು ದೇವಚರರಿಂದ ಪ್ರತ್ಯೇಕವಾಗಿ ಪ್ರಸ್ತಾಪಿಸಲಾಗಿದೆ.